## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :: 962(1128)

ಸದಸ್ಯರ ಹೆಸರು :: ಶ್ರೀ ಎಸ್.ವಿ.ಸಂಕನೂರ

ಉತ್ತರಿಸುವ ದಿನಾಂಕ :: 22.12.2021

ಉತ್ತರಿಸುವ ಸಚಿವರು :: ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗದಗ ಜಿಲ್ಲೆಯ ಲಕ್ಷ್ಮೇಶ್ವರ ತಾಲ್ಲೂಕಿನ ಯಳವತ್ತಿ ಗ್ರಾಮ ಪಂಚಾಯತ್ ಕಾರ್ಯಾಲಯದಿಂದ ರುದ್ರಭೂಮಿ ಖರೀದಿಸಲು ಮಾನ್ಯ ಜಿಲ್ಲಾಧಿಕಾರಿಗಳು, ಗದಗ ಇವರಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗದಗ ಜಿಲ್ಲೆ, ಲಕ್ಷ್ಮೇಶ್ವರ ತಾಲ್ಲೂಕಿನ ಯಳವತ್ತಿ ಗ್ರಾಮದಲ್ಲಿ ಯಾವುದೇ ಸರಕಾರಿ ಜಮೀನು ಲಭ್ಯವಿಲ್ಲದ ಕಾರಣ, ರುದ್ರಭೂಮಿ ಸೌಲಭ್ಯ ಕಲ್ಪಿಸುವ ಸಲುವಾಗಿ ಖಾಸಗಿ ಜಮೀನು ಖರೀದಿಸುವ ಬಗ್ಗೆ ಪ್ರಸ್ತಾವನೆ ಸ್ವೀಕೃತವಾಗಿರುತ್ತದೆ. |
| ಆ) | ಯಳವತ್ತಿ ಗ್ರಾಮಕ್ಕೆ ರುದ್ರಭೂಮಿಗಾಗಿ ಜಮೀನು ನೀಡಲು ಆ ಗ್ರಾಮದ ಕೆಲವು ಭೂ ಮಾಲೀಕರು ಒಪ್ಪಿಗೆ ಪತ್ರ ನೀಡಿರುವುದು ನಿಜವೇ; (ಮಾಹಿತಿ ನೀಡುವುದು) | ಲಕ್ಷ್ಮೇಶ್ವರ ತಾಲ್ಲೂಕು, ಯಳವತ್ತಿ ಗ್ರಾಮಕ್ಕೆ ರುದ್ರಭೂಮಿ ಸೌಲಭ್ಯ ಕಲ್ಪಿಸಲು ಖಾಸಗಿ ಜಮೀನು ಖರೀದಿಸುವ ಬಗ್ಗೆ ಜಮೀನು ಗುರುತಿಸುವ ಸಂದರ್ಭದಲ್ಲಿ, ಯಳವತ್ತಿ ಗ್ರಾಮದ ರಿ.ಸ.ನಂ.171/1 ಕ್ಷೇತ್ರ 04ಎ-17ಗುಂಟೆ ಪೈಕಿ 02ಎ-00ಗುಂಟೆ ಜಮೀನನ್ನು ಖರೀದಿ ಕೊಡಲು ಭೂ ಮಾಲೀಕರು ಒಪ್ಪಿಗೆ ಪತ್ರ ನೀಡಿರುತ್ತಾರೆ. |
| ಇ) | ಯಳವತ್ತಿ ಗ್ರಾಮಕ್ಕೆ ರುದ್ರಭೂಮಿಗಾಗಿ ಭೂಮಿಯನ್ನು ಖರೀದಿಸುವಲ್ಲಿ ಯಾವ ತೊಂದರೆಗಳಿವೆ; ಮತ್ತು ಆ ಗ್ರಾಮದ ಜನರ ಬೇಡಿಕೆಯನ್ನು ಈಡೇರಿಸಲು ಸರ್ಕಾರಕ್ಕೆ ಎಷ್ಟು ಅವಧಿ ಬೇಕಾಗುತ್ತದೆ? (ವಿವರ ನೀಡುವುದು) | ಸನ್ 2021-22ನೇ ಸಾಲಿನ ಚಾಲ್ತಿ ಮಾರ್ಗಸೂಚಿ ದರ ಪಟ್ಟಿ ಪ್ರಕಾರ ಪ್ರತಿ ಎಕರೆಗೆ ರೂ.1,68,000/-ರೂ ಇದ್ದು, ಸದರಿ ಬೆಲೆಯ ಮೂರು ಪಟ್ಟು ಅಂದರೆ ರೂ.5,04,000/-ಗಳಿಗೆ ಭೂ ಮಾಲೀಕರು ಒಪ್ಪಿರುವುದಿಲ್ಲ. ಪ್ರತಿ ಎಕರೆಗೆ ರೂ.7,00,000/-ಗಳಂತೆ ಒಟ್ಟು 02 ಎಕರೆಗೆ 14,00,000/- ಗಳ ಮೊತ್ತವನ್ನು ಜಮೀನು ಖರೀದಿಗೆ ನೀಡುವಂತೆ ವಿನಂತಿಸಿರುತ್ತಾರೆ. ಆದರೆ ಭೂಮಾಲೀಕರ ಬೇಡಿಕೆ ಮೊತ್ತವು ಮಾರ್ಗಸೂಚಿ ಬೆಲೆಯ ಮೂರು ಪಟ್ಟಿಗಿಂತ ಹೆಚ್ಚಾಗುತ್ತಿರುವುದರಿಂದ, ಸರ್ಕಾರದ ಸುತ್ತೋಲೆ ಸಂ:ಕಂಇ 6 ಭೂಸ್ವಾವಾ 2011, ದಿನಾಂಕ:06.06.2012ರನ್ವಯ ಅವಕಾಶವಿರುವುದಿಲ್ಲ. |

ಸಂಖ್ಯೆ: ಆರ್‌ಡಿ 38 ಎಲ್‌ಜಿಡಿ 2021

(ಆರ್.ಅಶೋಕ್)

ಕಂದಾಯ ಸಚಿವರು